ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತಮೂರನೆಯ ಅಧಿವೇಶನ
ಶುಕ್ರವಾರ, ದಿನಾಂಕ : 29 ನೇ ಜನವರಿ, 2021

ರಾಜ್ಯದಲ್ಲಿ ನರೇಗಾ ಯೋಜನೆಯ ಗುರಿಯನ್ನು ಹೆಚ್ಚಿಸುವ ಬಗ್ಗೆ

ಶ್ರೀ ಬಿ. ಕೆ. ಹರಿಪ್ರಸಾದ್(ವಿಧಾನಸಭೆಯಿಂದ ಚುನಾಯಿತರಾದವರು) -

15 (45) ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ -

(ಅ) ರಾಜ್ಯದಲ್ಲಿ ನರೇಗಾ ಯೋಜನೆ ಪ್ರಾರಂಭವಾದ ವರ್ಷ ಯಾವುದು; ರಾಜ್ಯಕ್ಕೆ ಎಷ್ಟು ಮಾನವ ದಿನಗಳು ಗುರಿಯನ್ನು ನಿಗಧಿಪಡಿಸಲಾಗಿದೆ; (ಜಿಲ್ಲಾವಾರು ವಿವರ ನೀಡುವುದು) 2020ರ ಅಂತ್ಯಕ್ಕೆ ಎಷ್ಟು ಮಾನವ ದಿನಗಳ ಗುರಿಯನ್ನು ತಲುಪಲಾಗಿದೆ; (ಜಿಲ್ಲಾವಾರು ವಿವರ ನೀಡುವುದು)

(ಆ) ರಾಜ್ಯಕ್ಕೆ ಯಾವ ಯಾವ ಸಂದರ್ಭಗಳಲ್ಲಿ 100 ದಿನಗಳಿಂದ ಮಾನವ ದಿನಗಳನ್ನು 150 ದಿನಗಳವರೆಗೆ ಹೆಚ್ಚಿಸುವಂತೆ ಕೇಂದ್ರ ಸರ್ಕಾರವನ್ನು ಒತ್ತಾಯಿಸಿದೆ; ಯಾವ ಯಾವ ವರ್ಷಗಳಲ್ಲಿ 100 ದಿನಗಳಿಗಿಂತ ಹೆಚ್ಚಿಗೆ ಮಾನವ ದಿನಗಳು ಉದ್ಯೋಗ ಸೃಜಿಸಲು ಕೇಂದ್ರ ಸರ್ಕಾರ ಅನುಮತಿ ನೀಡಿದೆ; ಗುರಿಯನ್ನು ತಲುಪಿರುವ ಗ್ರಾಮ ಪಂಚಾಯಿತಿಗಳಿಗೆ ಹೆಚ್ಚುವರಿ ಗುರಿ ನಿಗಧಿಪಡಿಸಲು ಇರುವ ತೊಡಕುಗಳೇನು; ತೊಡಕುಗಳಿಲ್ಲವಾದರೆ ಹೆಚ್ಚುವರಿ ಗುರಿ ನಿಗಧಿಪಡಿಸದಿರಲು ಕಾರಣವೇನು;

(ಇ) ಕೇಂದ್ರ ಸರ್ಕಾರದಿಂದ ರಾಜ್ಯ ಸರ್ಕಾರಕ್ಕೆ ನರೇಗಾ ಯೋಜನೆಗೆ ಸಂಬಂಧಿಸಿದಂತೆ ಬಿಡುಗಡೆ ಮಾಡಬೇಕಾದ ಅನುದಾನವೆಷ್ಟು; ಯಾವ ಯಾವ ವರ್ಷಗಳಿಂದ ಎಷ್ಟೆಷ್ಟು ಅನುದಾನ ಬಾಕಿ ಇದೆ; ಅನುದಾನ ಪಡೆಯಲು ರಾಜ್ಯ ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು? (ವಿವರ ನೀಡುವುದು)